# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 808 |
| ಮಾನ್ಯ ಸದಸ್ಯರ ಹೆಸರು | ಶ್ರೀ ರಘುನಾಥ್ ರಾವ್ ಮಲ್ಕಾಪೂರೆ |
| ಉತ್ತರಿಸಬೇಕಾದ ದಿನಾಂಕ | 17.12.2018 |
| ಉತ್ತರಿಸುವ ಸಚಿವರು | ಮಾನ್ಯ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಜಾತಿ ಗಣತಿ/ಸಮೀಕ್ಷೆ ನಡೆದದ್ದು ಯಾವಾಗ; ಜಾತಿ ಗಣತಿ/ಸಮೀಕ್ಷೆ ಪೂರ್ಣಗೊಂಡಿದ್ದು ಯಾವಾಗ; ಗಣತಿಗೆ ಎಷ್ಟು ಜನ ಅಧಿಕಾರಿ/ನೌಕರರನ್ನು ಬಳಸಿಕೊಳ್ಳಲಾಯಿತು; ಇದಕ್ಕಾಗಿ ವೆಚ್ಚವಾಗಿರುವ ಹಣ ಎಷ್ಟು; | ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗವು ರಾಜ್ಯಾದ್ಯಂತ ಸಾಮಾಜಿಕ ಮತ್ತು ಶೈಕ್ಷಣಿಕ ಸಮೀಕ್ಷೆಯನ್ನು ಏಪ್ರಿಲ್ 11, 2015ರಿಂದ ಪ್ರಾರಂಭಿಸಿ, ಮೇ 30, 2015ರಂದು ಪೂರ್ಣಗೊಳಿಸಿದೆ. ಈ ಸಮೀಕ್ಷೆ ಕಾರ್ಯಕ್ಕೆ 1.33 ಲಕ್ಷ ಶಿಕ್ಷಕರು, 22,190 ಮೇಲ್ವಿಚಾರಕರು ಹಾಗೂ ಇತರೆ 4,810 ಅಧಿಕಾರಿಗಳನ್ನೊಳಗೊಂಡಂತೆ ಒಟ್ಟು 1.60 ಲಕ್ಷ ಅಧಿಕಾರಿಗಳು/ಸಿಬ್ಬಂದಿಗಳ ಸೇವೆಯನ್ನು ಬಳಸಿಕೊಳ್ಳಲಾಗಿದೆ.<br><br>ಸಾಮಾಜಿಕ ಮತ್ತು ಶೈಕ್ಷಣಿಕ ಸಮೀಕ್ಷೆಗಾಗಿ ಇದೂವರೆವಿಗೂ ರೂ.158.47 ಕೋಟಿಗಳನ್ನು ವೆಚ್ಚ ಮಾಡಲಾಗಿದೆ. |
| ಆ) | ಸರ್ಕಾರ ಹೊಸದಾಗಿ ಜಾತಿ ಗಣತಿ/ಸಮೀಕ್ಷೆ ನಡೆಸಲು ಕಾರಣಗಳೇನು; ಸಮೀಕ್ಷೆ/ಗಣತಿ ಮಾಡುವಾಗ ಯಾವ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ; | ದಿನಾಂಕ:16.11.1992ರಂದು ನೀಡಿದ ಮಂಡಲ್ ವರದಿಗೆ ಸಂಬಂಧಿಸಿದ ತೀರ್ಪಿನಲ್ಲಿ ಸರ್ವೋಚ್ಛ ನ್ಯಾಯಾಲಯವು ಪ್ರತಿಯೊಂದು ರಾಜ್ಯದಲ್ಲೂ ಶಾಶ್ವತವಾಗಿ ಹಿಂದುಳಿದ ವರ್ಗಗಳ ಆಯೋಗ ರಚನೆಯಾಗಬೇಕು. ಜಾತಿವಾರು ಸಮೀಕ್ಷೆ ಆಯೋಗದ ಒಂದು ಮುಖ್ಯ ಕಾರ್ಯಭಾಗವಾಗಬೇಕು ಎಂಬುದಾಗಿ ಆದೇಶಿಸಿದೆ. ಅದಕ್ಕನುಗುಣವಾಗಿ ಕರ್ನಾಟಕ ರಾಜ್ಯದಲ್ಲಿ ಹಿಂದುಳಿದ ವರ್ಗಗಳ ಆಯೋಗ ಕಾಯ್ದೆ 1995ರಲ್ಲಿ ಜಾರಿಗೆ ಬಂದಿದೆ. ಆ ಕಾಯ್ದೆ ಅಡಿಯಲ್ಲಿ ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗವು ಕೆಲಸ ಮಾಡುತ್ತಿದೆ.<br><br>ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗದ ಅಧಿನಿಯಮ 1995ರ ಪ್ರಕರಣ 9 (2) ಮತ್ತು 11(1) ರ ಪ್ರಕಾರ 10 ವರ್ಷಗಳಿಗೊಮ್ಮೆ ಸಮೀಕ್ಷೆಯನ್ನು ನಡೆಸಬೇಕಾಗಿರುತ್ತದೆ. ದೇಶದಲ್ಲಿ ಪ್ರಥಮ ಬಾರಿಗೆ ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗದಿಂದ ಸಾಮಾಜಿಕ ಮತ್ತು ಶೈಕ್ಷಣಿಕ ಸಮೀಕ್ಷೆಯನ್ನು ನಡೆಸಲಾಗಿರುತ್ತದೆ. |

| | | |
|---|---|---|
| | | ರಾಜ್ಯದಲ್ಲಿನ ವಿವಿಧ ಜಾತಿ/ಸಮುದಾಯಗಳ ಸಾಮಾಜಿಕ, ಶೈಕ್ಷಣಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಆಧಾರದ ಮೇಲೆ ಹಿಂದುಳಿದ ವರ್ಗಗಳನ್ನು ಗುರುತಿಸಿ, ಅವುಗಳ ಸರ್ವತೋಮುಖ ಅಭಿವೃದ್ಧಿಗಾಗಿ ಪೂರಕವಾಗುವ ಕಾರ್ಯಕ್ರಮಗಳನ್ನು ರೂಪಿಸಲು ಸಾಮಾಜಿಕ, ಮತ್ತು ಶೈಕ್ಷಣಿಕ ಸಮೀಕ್ಷೆಯನ್ನು ಕೈಗೊಳ್ಳಲಾಗಿದೆ.<br><br>ಸಮೀಕ್ಷೆ ಮಾಡುವಾಗ ಪ್ರತಿಯೊಂದು ಕುಟುಂಬದ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ. |
| ಇ) | ಜಾತಿ ಗಣತಿ/ಸಮೀಕ್ಷೆ ವರದಿ ಸಿದ್ಧವಾಗಿದೆಯೇ; ವರದಿ ಸಿದ್ಧವಾಗದಿದ್ದಲ್ಲಿ ಕಾರಣಗಳೇನು; ವರದಿಯನ್ನು ಸರ್ಕಾರ ಅಂಗೀಕರಿಸಿದೆಯೇ; ಅಂಗೀಕರಿಸಿದ್ದಲ್ಲಿ ಜಾರಿಗೆ ತರುವ ಕುರಿತು ಸರ್ಕಾರದ ನಿಲುವೇನು; | ಸಾಮಾಜಿಕ ಮತ್ತು ಶೈಕ್ಷಣಿಕ ಸಮೀಕ್ಷೆಯಲ್ಲಿ ಸಂಗ್ರಹಿಸಲಾಗಿರುವ ಅಂಕಿಅಂಶಗಳನ್ನು ಗಣಕೀಕರಣಗೊಳಿಸಲಾಗಿದೆ. ಮಾಹಿತಿ ವಿಶ್ಲೇಷಣಾ ಕಾರ್ಯ ಹಾಗೂ ವರದಿಯನ್ನು ಸಿದ್ಧಪಡಿಸುವ ಕಾರ್ಯ ಪ್ರಗತಿಯಲ್ಲಿದ್ದು, ಸರ್ಕಾರಕ್ಕೆ ವರದಿಯನ್ನು ಸಲ್ಲಿಸಲಿದೆ. |
| ಈ) | ಹೊಸದಾಗಿ ಜಾತಿವಾರು ಸಮೀಕ್ಷೆ ನಡೆಸುವುದರಿಂದ ಆಗುವ ಅನುಕೂಲ ಅನಾನುಕೂಲತೆಗಳೇನು? | ಹೊಸದಾಗಿ ಸಾಮಾಜಿಕ ಮತ್ತು ಶೈಕ್ಷಣಿಕ ಸಮೀಕ್ಷೆಯನ್ನು ನಡೆಸಿರುವುದರಿಂದ, ಸಮೀಕ್ಷೆಯಲ್ಲಿ ಅನುಸರಿಸಿದ ವಿವಿಧ ಮಾನದಂಡಗಳ ಆಧಾರದ ಮೇಲೆ ರಾಜ್ಯದ ಎಲ್ಲಾ ಜಾತಿ/ವರ್ಗಗಳ ಸಾಮಾಜಿಕ, ಶೈಕ್ಷಣಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಈ ಮಾಹಿತಿಯನ್ನಾಧರಿಸಿ ಹಿಂದುಳಿದ ವರ್ಗಗಳನ್ನು ಗುರುತಿಸಿ ಅವರ ಸರ್ವೋರ್ತೋಮುಖ ಅಬಿವೃದ್ಧಿಗಾಗಿ ಪೂರಕವಾಗುವ ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸಲು ಅನುಕೂಲವಾಗುತ್ತದೆ. ಇದರಿಂದಾಗಿ ರಾಜ್ಯದಲ್ಲಿರುವ ಎಲ್ಲಾ ಜಾತಿ/ಜನಾಂಗಗಳ ಜನಸಂಖ್ಯೆ ಮಾಹಿತಿ ಹಾಗೂ ಅವರ ಸಾಮಾಜಿಕ, ಶೈಕ್ಷಣಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಮಾಹಿತಿಯು ಸಹ ಲಭ್ಯವಾಗಲಿದೆ. |

**ಸಂಖ್ಯೆ: ಹಿಂವಕ 294 ಬಿಸಿಎ 2018**

**(ಸಿ. ಪುಟ್ಟರಂಗಶೆಟ್ಟಿ)**
**ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.**